12·05·1995

# ಇತಿಹಾಸ ದರ್ಶನ

ಸಂಪುಟ ೯ / ೧೯೯೪

೧೯೯೩ರಲ್ಲಿ ಮೈಸೂರಿನಲ್ಲಿ ಸಮಾವೇಶಗೊಂಡ ಅಕಾದೆಮಿಯ
ಏಳನೆಯ ವಾರ್ಷಿಕ ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧಗಳ ಸಂಪುಟ

*ಸಂಪಾದಕರು*

ಡಾ। ಸೂರ್ಯನಾಥ ಕಾಮತ್

ಡಾ। ದೇವರಕೊಂಡಾರೆಡ್ಡಿ



ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು

**ITIHASA DARSHANA**
Proceedings of the Seventh Annual
Conference of the Karnataka Itihasa
Academy (regd.) held at Mysore
on 23, 24 and 25th July 1993.

Volume 9, July 1994.

Edited by Dr. Suryanath Kamath
& Dr. Devarakonda Reddy
Published by Karnataka Itihasa Academy (Regd.)
Ghokhale Institute of Public Affairs Compound
Basavanagudi Road, Narasimharaja Colony
Bangalore - 560 019



ಬೆಲೆ : ರೂ ೧೦೦–೦೦

ಲಕ್ಷ್ಮಿ ಮುದ್ರಣಾಲಯ
ಚಾಮರಾಜಪೇಟೆ, ಬೆಂಗಳೂರು – ೫೬೦ ೦೧೮
ದೂರವಾಣಿ : ೬೬೧೩೧೨೩

# ಸಂಪಾದಕೀಯ

ಹೋದ ವರ್ಷ (೧೯೯೩) ಮೈಸೂರಲ್ಲಿ ನಡೆದ ಸಮ್ಮೇಳನದಲ್ಲಿ ೭೦ಕ್ಕೂ ಮೇಲ್ಪಟ್ಟು ಪ್ರಬಂಧಗಳು ಮಂಡಿತವಾದರೂ ಇಲ್ಲಿ ಕೇವಲ ೬೧ ಮುದ್ರಿತವಾಗಿವೆ. ಕೆಲವೊಂದು ಪ್ರಬಂಧಗಳ ಹಸ್ತಪ್ರತಿ ಕೈ ಸೇರಿಲ್ಲ. ಕೆಲವೊಂದು ಕರ್ನಾಟಕಕ್ಕೆ ಸಂಬಂಧಿಸಿದ್ದಲ್ಲ ಅಥವಾ ಹೊಸ ವಿಷಯವನ್ನು ಹೇಳುತ್ತಿಲ್ಲ ಎಂಬ ಕಾರಣಕ್ಕೆ ಕೈಬಿಡುವುದು ಅನಿವಾರ್ಯವಾಯಿತು.

ಎಂದಿನಂತೆ ಪ್ರಾಗಿತಿಹಾಸ, ಶಾಸನ, ಪುರಾತತ್ತ್ವ, ಪ್ರಾಚೀನ, ಮಧ್ಯ ಹಾಗೂ ಆಧುನಿಕ ಎಂಬ ವರ್ಗೀಕರಣಕ್ಕೆ ಅನುಗುಣವಾಗಿ ಪ್ರಬಂಧಗಳನ್ನು ಪ್ರಕಟಿಸಿದೆ. ವಿಶ್ವವಿದ್ಯಾಲಯದ ಅಧ್ಯಾಪಕರಷ್ಟೇ, ಶಾಲಾ ಉಪಾಧ್ಯಾಯರೂ ಇತರ ಕ್ಷೇತ್ರಗಳಲ್ಲಿ ದುಡಿಯುತ್ತಿರುವ ಇತಿಹಾಸ ಪ್ರೇಮಿಗಳೂ–ರೈತರೂ ಸಹ–ತಮ್ಮ ಹೊಸ ಕಾಣಿಕೆಗಳನ್ನು ಪ್ರಬಂಧರೂಪದಲ್ಲಿ ಇಲ್ಲಿ ಮಂಡಿಸಿದ್ದಾರೆ. ಸಮ್ಮೇಳನದಲ್ಲಿ ಪ್ರಬಂಧ ಮಂಡಿಸಲು ಬಯಸುವ ಎಲ್ಲರಿಗೂ ಅವಕಾಶ ಆಗುತ್ತಿಲ್ಲ. ಸಾಕಷ್ಟು ಸಮಯವೂ ಸಿಗುತ್ತಿಲ್ಲ. ಎರಡು ದಿನದ ಸಮ್ಮೇಳನ ಈಗ ಮೂರು ದಿನಗಳದ್ದಾಗುತ್ತಿದೆ. ಔಪಚಾರಿಕ ಸಮಾರೋಪ, ಮನರಂಜನೆ ಕಾರ್ಯಕ್ರಮಗಳನ್ನೂ ಕೈಬಿಟ್ಟಿದೆ – ಪ್ರಬಂಧ ಮಂಡನೆಗೆ ಹೆಚ್ಚಿನ ಅವಕಾಶ ಆಗಲಿ, ಎಂದು.

ಇತಿಹಾಸದ ಬಗ್ಗೆ, ಹೊಸ ವಿಷಯ ಶೋಧಿಸುವ ಬಗ್ಗೆ ತರುಣ ಪೀಳಿಗೆಯಲ್ಲಿ ಮೂಡುತ್ತಿರುವ ಉತ್ಸಾಹ ಹೆಮ್ಮೆ ತರುವಂಥದ್ದು; ಆಶಾದಾಯಕವಾದುದು. ಇತಿಹಾಸ ಅಕಾದೆಮಿ ತಾನು ಇಟ್ಟುಕೊಂಡ ಗುರಿಯತ್ತ ಸಾಗುತ್ತಿರುವ ಬಗ್ಗೆ ಹೆಮ್ಮೆಯಾಗುತ್ತಿದೆ. ಇದಕ್ಕೆ ಎಲ್ಲರ ಉತ್ಸಾಹೀ ಸಹಕಾರವೇ ಕಾರಣ.

ಈ ಸಂಪುಟದ ಕರಡುತಿದ್ದಲು ಆರಂಭದಲ್ಲಿ ನೆರವಾದ ಶ್ರೀ ಶಿವಣ್ಣ ಮನ್ನಾಚಾರ್ ಅವರಿಗೂ ಚಿತ್ರ, ನಕಾಶೆಗಳ ವಿನ್ಯಾಸ ತಯಾರಿಸಿಕೊಟ್ಟ ಶ್ರೀ ಅ.ಲ. ನರಸಿಂಹನ್ ಅವರಿಗೂ ಸುಂದರವಾಗಿ ಸಕಾಲದಲ್ಲಿ ಸಂಪುಟವನ್ನು ಮುದ್ರಿಸಿದ ಶ್ರೀ ಲಕ್ಷ್ಮಿ ಮುದ್ರಣಾಲಯದ ಸಿಬ್ಬಂದಿಯವರಿಗೂ ನಮ್ಮ ಕೃತಜ್ಞತೆಗಳು.

ಸೂರ್ಯನಾಥ ಕಾಮತ್

ದೇವರಕೊಂಡಾರೆಡ್ಡಿ

# ಕರ್ನಾಟಕ ಇತಿಹಾಸ ಅಕಾದೆಮಿ (ರಿ.)

## ಬೆಂಗಳೂರು

### ಕಾರ್ಯಕಾರಿ ಸಮಿತಿ

(ದಿನಾಂಕ ೮–೭–೧೯೯೪ ರಲ್ಲಿದ್ದಂತೆ)

ಅಧ್ಯಕ್ಷರು

ಡಾ। ಜಿ. ಎಸ್. ದೀಕ್ಷಿತ್, ಬೆಂಗಳೂರು

ಉಪಾಧ್ಯಕ್ಷರು

ಡಾ। ಡಿ. ವಿ. ದೇವರಾಜ್, ಮೈಸೂರು

ಶ್ರೀ ಎಂ. ಜಿ. ನಾಗರಾಜ್, ಬೆಂಗಳೂರು

ಪ್ರಧಾನ ಕಾರ್ಯದರ್ಶಿ

ಡಾ। ಎಚ್. ಎಸ್. ಗೋಪಾಲರಾವ್, ಅರಿಶಿನಕುಂಟೆ

ಕಾರ್ಯದರ್ಶಿಗಳು

ಡಾ। ಎಚ್. ಆರ್. ರಘುನಾಥಭಟ್ಟ, ಧಾರವಾಡ

ಡಾ। ದೇವರಕೊಂಡಾರೆಡ್ಡಿ, ಬೆಂಗಳೂರು

ಕೋಶಾಧಿಕಾರಿ

ಶ್ರೀ ಎಂ. ಬಿ. ಪಾಟೀಲ, ಬೆಂಗಳೂರು

ಸದಸ್ಯರು

ಡಾ। ಸೂರ್ಯನಾಥ ಕಾಮತ್, ಬೆಂಗಳೂರು

ಡಾ। ಎ. ವಿ. ನರಸಿಂಹಮೂರ್ತಿ, ಮೈಸೂರು

ಡಾ। ರು.ಮ. ಷಡಕ್ಷರಯ್ಯ, ಧಾರವಾಡ

ಶ್ರೀ ವಿ. ಸಿ. ಮಾಲಗತ್ತಿ, ಬೆಳಗಾವಿ

ಶ್ರೀ ಎಸ್. ರಾಜೇಂದ್ರಪ್ಪ, ಬೆಂಗಳೂರು

ಶ್ರೀ ಎಸ್. ಎಂ. ನಾಗಭೂಷಣ, ಧಾರವಾಡ

ಶ್ರೀ ಕೆ. ಬಿ. ಶಿವತಾರಕ್, ಬ್ರಹ್ಮಾವರ

ಡಾ। ಚೂಡಾಮಣಿನಂದಗೋಪಾಲ್, ಬೆಂಗಳೂರು

ಡಾ। ಬಸವಲಿಂಗ ಸೊಪ್ಪಿಮಠ, ರಾಯಚೂರು

ಶ್ರೀಮತಿ ಉಷಾ ದೇಸಾಯಿ, ರಾಯಚೂರು

ಪ್ರೊ। ವಸಂತ ಕುಷ್ಟಗಿ, ಗುಲ್ಬರ್ಗ

ಶ್ರೀ ಬಿ. ರಾಜಶೇಖರಪ್ಪ, ಚಿತ್ರದುರ್ಗ

ಡಾ। ಬಿ. ನಂಜುಂಡಸ್ವಾಮಿ, ತುಮಕೂರು

ಡಾ। ಶ್ರೀನಿವಾಸ ಕೆ. ಹಾವನೂರು, ಪುಣೆ

ಡಾ। ಎಸ್. ಕೆ. ಕೊಪ್ಪಾ, ಇಂಡಿ

ಡಾ। ಜ್ಯೋತಿಬಾಯಿ, ಬೆಂಗಳೂರು

# ಪರಿವಿಡಿ

## ಕರ್ನಾಟಕ ಇತಿಹಾಸ ಅಕಾದೆಮಿ

ಬೆಂಗಳೂರು

## ಇತಿಹಾಸ ಪ್ರೇಮಿಗಳಿಗೆ ಕರೆ

# 'ಐತಿಹಾಸಿಕ ಪರಂಪರೆ ಉಳಿಸಿ'

ಕರ್ನಾಟಕದಲ್ಲಿ 'ಐತಿಹಾಸಿಕ ಪರಂಪರೆ ಉಳಿಸಿ' ಎಂಬ ಜನಜಾಗೃತಿ ಚಳವಳಿ ನಡೆಸಲು ಕರ್ನಾಟಕ ಇತಿಹಾಸ ಅಕಾದೆಮಿ ಯತ್ನಿಸುತ್ತಿದೆ. ಪ್ರಾಚೀನ ಕೋಟೆಗಳು, ಕಟ್ಟಡಗಳು, ದೇವಾಲಯಗಳು, ಮಸೀದಿಗಳು, ಇಗರ್ಜಿ(ಚರ್ಚು)ಗಳು, ಶಾಸನಗಳು, ವೀರಗಲ್ಲು ಮುಂತಾದ ಸ್ಮಾರಕಶಿಲೆಗಳು, ತಾಮ್ರಪಟಗಳು, ತಾಳೆಗರಿಯ ಹೊತ್ತಿಗೆಗಳು, ಐತಿಹಾಸಿಕ ದಾಖಲೆಗಳಾಗಬಲ್ಲ ಕಾಗದಪತ್ರಗಳು, ನಾಣ್ಯಗಳು, ಕಲಾಕೃತಿಗಳು (ಶಿಲ್ಪ ಕರ–ಕುಶಲ ಕಲೆಯ ವಸ್ತುಗಳು, ವರ್ಣಚಿತ್ರಗಳು), ಆಯುಧಗಳು ಮುಂತಾದ ಪ್ರಾಚೀನ ವಸ್ತುಗಳ ರಕ್ಷಣೆಗಾಗಿ ಪ್ರಚಾರ ಮಾಡುವುದು ಈ ಚಳವಳಿಯ ಉದ್ದೇಶ.

### ಚಟುವಟಿಕೆಯ ಸ್ವರೂಪ

ಪ್ರಾಚೀನ ವಸ್ತು ಮತ್ತು ಕಲಾಕೃತಿಗಳ (ಯಾಂಟಿಕ್ವಿಟೀಸ್) ನೋಂದಾವಣೆಗೆ ಪ್ರೇರಣೆ ನೀಡುವುದು.

ಪ್ರಾಚೀನ ಶಾಸನ, ಪ್ರತಿಮೆ, ಸ್ಮಾರಕಶಿಲೆಗಳ ರಕ್ಷಣೆಯ ಅವಶ್ಯಕತೆಯ ಬಗೆಗೆ ಅವುಗಳ ಪರಿಸರದ ಬಗೆಗೆ ಜನರಿಗೆ ತಿಳುವಳಿಕೆ ನೀಡುವುದು.

ಪ್ರಾಚೀನ ಕಟ್ಟಡಗಳ ನಾಶ, ದುರುಪಯೋಗ, ಅವುಗಳ ಪರಿಸರದ ಮೇಲೆ ಒತ್ತುವರಿ ನಡೆಸುವುದರ ವಿರುದ್ಧ ಧ್ವನಿಯೆತ್ತುವುದು (ಪ್ರಚಾರ, ಸರಕಾರಕ್ಕೆ ಬರೆಯುವುದು, ಪತ್ರಿಕೆಗಳಿಗೆ ಬರೆಯುವುದು).

ಓಲೆಗರಿಗಳ ಅಸ್ತಿತ್ವದ ಬಗೆಗೆ ಅಧಿಕೃತ ಸಂಗ್ರಾಹಕರಿಗೆ (ಸಾಹಿತ್ಯ ಪರಿಷತ್ತು, ವಿಶ್ವವಿದ್ಯಾಲಯಗಳ ಸಂಬಂಧಿಸಿದ ಶಾಖೆಗಳು) ಮಾಹಿತಿ ನೀಡುವುದು. ಐತಿಹಾಸಿಕ ಮಹತ್ವದ ಕಾಗದ ಪತ್ರಗಳ ಬಗೆಗೆ ರಾಜ್ಯ ಪತ್ರಾಗಾರಕ್ಕೆ ಮಾಹಿತಿ ನೀಡುವುದು.

ಅಧ್ಯಾಪಕರು, ವಿದ್ಯಾರ್ಥಿಗಳು, ಬುದ್ಧಿಜೀವಿಗಳು ಈ ಚಟುವಟಿಕೆಯಲ್ಲಿ ವಿಶೇಷವಾಗಿ ಪಾಲುಗೊಳ್ಳಲು ಅಕಾದೆಮಿ ಕರೆ ನೀಡುತ್ತದೆ.